## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 772

ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 05.03.2021

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರಗಳು</th></tr>
<tr><td>ಅ)</td><td>ರಾಜ್ಯದಲ್ಲಿ ಎಷ್ಟು ಸರ್ಕಾರಿ ಬಸ್ ನಿಲ್ದಾಣಗಳು ಇವೆ; (ವಿವರ ನೀಡುವುದು)</td><td>ರಾಜ್ಯದಲ್ಲಿ ಒಟ್ಟು 551 ಸರ್ಕಾರಿ ಬಸ್ ನಿಲ್ದಾಣಗಳಿದ್ದು, ಸಂಸ್ಥೆವಾರು ಮಾಹಿತಿ ಈ ಕೆಳಕಂಡಂತಿದೆ:<br><br>ಕ.ರಾ.ರ.ಸಾ.ನಿಗಮ:<br>
<table>
<tr><td>1</td><td>ಜಿಲ್ಲಾ ಕೇಂದ್ರ ಬಸ್ ನಿಲ್ದಾಣಗಳು</td><td>19</td></tr>
<tr><td>2</td><td>ತಾಲ್ಲೂಕು ಕೇಂದ್ರ ಬಸ್ ನಿಲ್ದಾಣ</td><td>68</td></tr>
<tr><td>3</td><td>ಹೋಬಳಿ ಕೇಂದ್ರ ಬಸ್ ನಿಲ್ದಾಣ</td><td>78</td></tr>
<tr><td colspan="2">ಒಟ್ಟು</td><td>165</td></tr>
</table>
ಬೆಂ.ಮ.ಸಾ.ಸಂಸ್ಥೆ:<br>
<table>
<tr><td>1</td><td>ಟಿಟಿಎಂಸಿ</td><td>10</td></tr>
<tr><td>2</td><td>ದೊಡ್ಡ ಪ್ರಮಾಣದ ಬಸ್ ನಿಲ್ದಾಣಗಳು</td><td>02</td></tr>
<tr><td>3</td><td>ಮಧ್ಯಮ/ ಸಣ್ಣ ಬಸ್ ನಿಲ್ದಾಣಗಳು</td><td>44</td></tr>
<tr><td colspan="2">ಒಟ್ಟು</td><td>56</td></tr>
</table>
ವಾ.ಕ.ರ.ಸಾ.ಸಂಸ್ಥೆ:<br>
<table>
<tr><td>1</td><td>ಜಿಲ್ಲಾ ಕೇಂದ್ರ ಬಸ್ ನಿಲ್ದಾಣಗಳು</td><td>14</td></tr>
<tr><td>2</td><td>ತಾಲ್ಲೂಕು ಕೇಂದ್ರ ಬಸ್ ನಿಲ್ದಾಣ</td><td>51</td></tr>
<tr><td>3</td><td>ಪಟ್ಟಣ ಬಸ್ ನಿಲ್ದಾಣ</td><td>07</td></tr>
<tr><td>4</td><td>ಹೋಬಳಿ ಕೇಂದ್ರ ಬಸ್ ನಿಲ್ದಾಣ</td><td>50</td></tr>
<tr><td>5</td><td>ಗ್ರಾಮೀಣ ಬಸ್ ನಿಲ್ದಾಣ</td><td>55</td></tr>
<tr><td colspan="2">ಒಟ್ಟು</td><td>177</td></tr>
</table>
ಈ.ಕ.ರ.ಸಾ.ಸಂಸ್ಥೆ:<br>
<table>
<tr><td>1</td><td>ಜಿಲ್ಲಾ ಕೇಂದ್ರ ಬಸ್ ನಿಲ್ದಾಣಗಳು</td><td>07</td></tr>
<tr><td>2</td><td>ತಾಲ್ಲೂಕು ಕೇಂದ್ರ ಬಸ್ ನಿಲ್ದಾಣ</td><td>30</td></tr>
<tr><td>3</td><td>ನಗರ ಬಸ್ ನಿಲ್ದಾಣ</td><td>09</td></tr>
<tr><td>4</td><td>ಹೋಬಳಿ ಕೇಂದ್ರ ಬಸ್ ನಿಲ್ದಾಣ</td><td>82</td></tr>
<tr><td>5</td><td>ಗ್ರಾಮಾಂತರ ಬಸ್ ನಿಲ್ದಾಣ</td><td>26</td></tr>
<tr><td colspan="2">ಒಟ್ಟು</td><td>154</td></tr>
</table>
</td></tr>
<tr><td>ಆ)</td><td>ಈ ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆಯೇ;</td><td>ಕ.ರಾ.ರ.ಸಾ.ನಿಗಮ:<br>165 ಬಸ್ ನಿಲ್ದಾಣಗಳ ಪೈಕಿ 99 ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆ.<br><br>ಬೆಂ.ಮ.ಸಾ.ಸಂಸ್ಥೆ:<br>08 ಟಿಟಿಎಂಸಿ, 01 ದೊಡ್ಡ ಪ್ರಮಾಣದ ಬಸ್ ನಿಲ್ದಾಣ ಮತ್ತು 05 ಮಧ್ಯಮ/ ಸಣ್ಣ ಪ್ರಮಾಣದ ಬಸ್ ನಿಲ್ದಾಣಗಳಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ವಿಶ್ರಾಂತಿ ಗೃಹಗಳನ್ನು ಕೇಂದ್ರ ಸರ್ಕಾರದ ನಿರ್ಭಯ ಯೋಜನೆಯ ಅನುದಾನದಡಿಯಲ್ಲಿ ನಿರ್ಮಿಸಲಾಗಿದೆ.</td></tr>
</table>

...2

| | | |
|---|---|---|
| | | **ವಾ.ಕ.ರ.ಸಾ.ಸಂಸ್ಥೆ:**<br>177 ಬಸ್ ನಿಲ್ದಾಣಗಳ ಪೈಕಿ ಒಟ್ಟು 159 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆ.<br><br>**ಈ.ಕ.ರ.ಸಾ.ಸಂಸ್ಥೆ:**<br>154 ಬಸ್ ನಿಲ್ದಾಣಗಳ ಪೈಕಿ, ಪ್ರಮುಖ 123 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲಾಗಿದೆ. |
| ಇ) | ಇಲ್ಲವಾದಲ್ಲಿ, ನಿರ್ಮಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ಒದಗಿಸುವುದು) | ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲು -<br>**ಕ.ರಾ.ರ.ಸಾ.ನಿಗಮ:**<br>66 ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳ ಕೊರತೆಯಿದ್ದು, ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕ ರೋಗದ ಪಿಡುಗಿನಿಂದಾಗಿ ನಿಗಮವು ತೀವ್ರ ಆರ್ಥಿಕ ಸಂಕಷ್ಟದಲ್ಲಿರುವುದರಿಂದ, ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಕಷ್ಟಕರವಾಗಿದ್ದು, ಹಂತಹಂತವಾಗಿ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ನಿರ್ಮಿಸಲು ಕ್ರಮ ಜರುಗಿಸಲಾಗುವುದು.<br>**ಬೆಂ.ಮ.ಸಾ.ಸಂಸ್ಥೆ:**<br>ಒಟ್ಟು 16 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದೆ. ಸಂಸ್ಥೆಯ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಹಾಗೂ ಬಸ್ ನಿಲ್ದಾಣಗಳಲ್ಲಿ ಅವಶ್ಯಕತೆಯ ಮೇರೆಗೆ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು.<br>**ವಾ.ಕ.ರ.ಸಾ.ಸಂಸ್ಥೆ:**<br>08 ಬಸ್ ನಿಲ್ದಾಣಗಳು ಚಿಕ್ಕ ಬಸ್ ನಿಲ್ದಾಣಗಳಿದ್ದು, ಗ್ರಾಮೀಣ ಪ್ರದೇಶಗಳಲ್ಲಿರುವುದರಿಂದ ಹಾಗೂ ಉಳಿದ 10 ರಸ್ತೆ ಬದಿ ಬಸ್ ಶೆಲ್ಟರ್‌ಗಳಾಗಿರುವುದರಿಂದ, ಮಹಿಳಾ ವಿಶ್ರಾಂತಿ ಗೃಹಗಳನ್ನು ನಿರ್ಮಿಸಿರುವುದಿಲ್ಲ<br>**ಈ.ಕ.ರ.ಸಾ.ಸಂಸ್ಥೆ:**<br>ಸಂಸ್ಥೆಯ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ, 31 ಬಸ್ ನಿಲ್ದಾಣಗಳಲ್ಲಿ ವಿಶ್ರಾಂತಿ ಗೃಹಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು. |
| ಈ) | ಈ ಬಸ್ ನಿಲ್ದಾಣಗಳಲ್ಲಿನ ಶೌಚಾಲಯಗಳ ಸಮರ್ಪಕ ನಿರ್ವಹಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಸಾರಿಗೆ ಸಂಸ್ಥೆಗಳ ವ್ಯಾಪ್ತಿಯಲ್ಲಿನ ಎಲ್ಲಾ ಬಸ್ ನಿಲ್ದಾಣಗಳಲ್ಲಿನ ಮೂತ್ರಾಲಯ ಮತ್ತು ಶೌಚಾಲಯಗಳ ಸ್ವಚ್ಛತೆಯ ಸಮರ್ಪಕ ನಿರ್ವಹಣೆಯ ಕಾರ್ಯಕ್ಕಾಗಿ ವಿಭಾಗಗಳ ಮಟ್ಟದಲ್ಲಿ ನೊಂದಾಯಿತ ಸ್ವಚ್ಛತಾ ಗುತ್ತಿಗೆದಾರರನ್ನು ಕೆ.ಟಿ.ಟಿ.ಪಿ ಕಾಯ್ದೆಯನ್ವಯ ಟೆಂಡರ್ ಮೂಲಕ ನೇಮಕ ಮಾಡಲಾಗುತ್ತಿದೆ. ಅಧಿಕಾರಿಗಳು ನಿಯಮಿತವಾಗಿ ಬಸ್ ನಿಲ್ದಾಣಗಳಿಗೆ ಭೇಟಿ ನೀಡಿ ಸ್ವಚ್ಛತೆಯ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಿದ್ದಾರೆ. ಸ್ವಚ್ಛತೆ ಹಾಗೂ ಇತರೆ ಸಮಸ್ಯೆಗಳ ಸಂಬಂಧ ದೂರುಗಳ ಬಗ್ಗೆ ಕ್ರಮವಹಿಸುತ್ತಿದ್ದು, ನ್ಯೂನ್ಯತೆಗಳಿಗೆ ಗುತ್ತಿಗೆದಾರರಿಗೆ ಕರಾರು ನಿಯಮಾವಳಿಗಳನ್ವಯ ಕ್ರಮ ವಹಿಸಲಾಗುತ್ತಿದೆ.<br>ಖಾಸಗಿ ಗುತ್ತಿಗೆದಾರರು ಇಲ್ಲದ ಬಸ್ ನಿಲ್ದಾಣಗಳಲ್ಲಿ ಸ್ಥಳೀಯ ವ್ಯವಸ್ಥೆಯಡಿಯಲ್ಲಿ ಸ್ವಚ್ಛತೆಯನ್ನು ನಿರ್ವಹಿಸಲಾಗುತ್ತಿದೆ. |

ಸಂಖ್ಯೆ: ಟಿಡಿ 53 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು